

# ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 22-03-2021 ಪ್ರಶ್ನೆ ಸಂಖ್ಯೆ : 1519 (1855)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಎಸ್.ಎಲ್. ಭೋಜೇಗೌಡ (ಶಿಕ್ಷಕರ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 22-03-2021

ಉತ್ತರಿಸುವ ಸಚಿವರು : ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಹಾಗೂ ವೈದ್ಯಕೀಯ ಶಿಕ್ಷಣ ಸಚಿವರು

ವಿಷಯ : ಕೋವಿಡ್ ವಾರಿಯರ್ಸ್‌ಗೆ ಪರಿಹಾರ ಮತ್ತು ಸೂಕ್ತ ಭದ್ರತೆ ಒದಗಿಸುವ ಬಗ್ಗೆ

(ಅ) ರಾಜ್ಯದಲ್ಲಿ ಕೋವಿಡ್-19ನಿಂದಾಗಿ ಇದುವರೆವಿಗೂ ಮರಣ ಹೊಂದಿದವರ ಸಂಖ್ಯೆ ಎಷ್ಟು; (ಜಿಲ್ಲಾವಾರು ವಿವರ ನೀಡುವುದು)

(ಆ) ಕೋವಿಡ್-19 ನಿಯಂತ್ರಣದಲ್ಲಿ ಕೊರೋನಾ ವಾರಿಯರ್ಸ್ ಎಂದು ಪರಿಗಣಿಸಲಾಗಿರುವವರು ಯಾರು; (ಜಿಲ್ಲಾವಾರು ವಿವರ ನೀಡುವುದು)

(ಇ) ಮರಣ ಹೊಂದಿದಂತಹ ಕೋವಿಡ್ ವಾರಿಯರ್ಸ್‌ಗಳಿಗೆ ಸರ್ಕಾರವು ಘೋಷಣೆ ಮಾಡಿರುವ ಪರಿಹಾರವೆಷ್ಟು; ಹಾಗಿದ್ದಲ್ಲಿ, ಇದುವರೆವಿಗೂ ಎಷ್ಟು ಜನ ವಾರಿಯರ್ಸ್‌ಗಳಿಗೆ ಪರಿಹಾರ ಒದಗಿಸಲಾಗಿದೆ; ಮತು ಬಾಕಿ ಉಳಿಸಿಕೊಂಡಿರುವ ಪರಿಹಾರಗಳೆಷ್ಟು; ಇದಕ್ಕೆ ಕಾರಣಗಳೇನು; (ಜಿಲ್ಲಾವಾರು, ಪ್ರಕರಣವಾರು ವಿವರ ನೀಡುವುದು)

(ಈ) ಕೋವಿಡ್ ವಾರಿಯರ್ಸ್‌ಗಳಿಗೆ ಒತ್ತಡವಾಗದಂತೆ ಕೆಲಸ ನಿರ್ವಹಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು; ಇದರಲ್ಲಿ ಸರ್ಕಾರವು ಯಶಸ್ಸು ಕಂಡಿದೆಯೇ; ಹಾಗಿದ್ದಲ್ಲಿ ಕೋವಿಡ್ ವಾರಿಯರ್ಸ್‌ಗಳು ಒತ್ತಡದಲ್ಲಿಯೇ ಕೆಲಸ ನಿರ್ವಹಿಸುತ್ತಿರುವುದೇಕೆ? (ಸೂಕ್ತ ಕಾರಣಗಳನ್ನು ತಿಳಿಸುವುದು)